# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 510 |
| ಸದಸ್ಯರ ಹೆಸರು | : | ಶ್ರೀ ಯು.ಬಿ.ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸುವವರು | : | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು. |
| ಉತ್ತರಿಸಬೇಕಾದ ದಿನಾಂಕ | : | 05/02/2021 |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಬೆಂಗಳೂರು ನಗರದಲ್ಲಿರುವ ಅಂಗನವಾಡಿಗಳಲ್ಲಿ ಆಶಾ ಕಾರ್ಯಕರ್ತೆಯರು ಮತ್ತು ಸಹಾಯಕಿಯರ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಬಂದಿದೆ.<br><br>55 ಅಂಗನವಾಡಿ ಕಾರ್ಯಕರ್ತೆಯರ ಹಾಗೂ 209 ಅಂಗನವಾಡಿ ಸಹಾಯಕಿ ಹುದ್ದೆಗಳು ಖಾಲಿ ಇದ್ದು, ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳ ಅರ್ಜಿಗಳನ್ನು ಆಹ್ವಾನಿಸಿ ದಿನಾಂಕ:21-12-2020ರಲ್ಲಿ ಅಧಿಸೂಚನೆ ಹೊರಡಿಸಲಾಗಿದೆ. ಸರ್ಕಾರದ ಆದೇಶಗಳಂತೆ ನೇಮಕಾತಿ ಪ್ರಕ್ರಿಯೆ ನಡೆಸಲಾಗುತ್ತಿದೆ. |
| ಆ. | ಆಶಾ ಕಾರ್ಯಕರ್ತೆಯರು ಮತ್ತು ಸಹಾಯಕಿಯರನ್ನು ನೇಮಕಾತಿ ಮಾಡಿಕೊಳ್ಳಲು ಈಗಾಗಲೇ ಅಧಿಸೂಚನೆಯನ್ನು ಹೊರಡಿಸಲಾಗಿದೆಯೇ; ಹಾಗಿದ್ದಲ್ಲಿ, ಅರ್ಹತಾ ಮಾನದಂಡಗಳೇನು; (ಮಾಹಿತಿಯನ್ನು ನೀಡುವುದು.) | ಹೌದು ಹೊರಡಿಸಲಾಗಿದೆ.<br><br>ಸರ್ಕಾರದ ಮಾರ್ಗಸೂಚಿಗಳಂತೆ ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿಯರನ್ನು ಜಿಲ್ಲಾ ಮಟ್ಟದಲ್ಲಿ ಆಯ್ಕೆ ಮಾಡಲಾಗುತ್ತಿದೆ. ಕಾಲಕಾಲಕ್ಕೆ ಖಾಲಿ ಇದ್ದ ಹುದ್ದೆಗಳನ್ನು ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿ ಮಾನ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಜಿಲ್ಲಾ ಆಯ್ಕೆ ಸಮಿತಿ ಮೂಲಕ ಆಯ್ಕೆ ಮಾಡಿ ಭರ್ತಿ ಮಾಡಲಾಗುತ್ತಿದೆ.<br><br>**ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಆಯ್ಕೆಗೆ ಅರ್ಹತೆ ಮಾನದಂಡಗಳು :**<br><br>1. ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗೆ ಅರ್ಜಿ ಸಲ್ಲಿಸಲು 18 ರಿಂದ 35 ವರ್ಷ ವಯೋಮಿತಿಯೊಳಗಿರಬೇಕು.<br>2. ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಆಯ್ಕೆಗೆ ಸ್ಥಳೀಯರಾಗಿರಬೇಕು.<br>3. ಅಂಗನವಾಡಿ ಕಾರ್ಯಕರ್ತೆ ಆಯ್ಕೆಗೆ ಎಸ್.ಎಸ್.ಎಲ್.ಸಿ. ತೇರ್ಗಡೆಯಾಗಿದ್ದು, ಹೆಚ್ಚಿನ ವಿದ್ಯಾರ್ಹತೆಯನ್ನು ಆಯ್ಕೆಗೆ ಪರಿಗಣಿಸುವಂತಿಲ್ಲ.<br>4. ಅಂಗನವಾಡಿ ಸಹಾಯಕಿ ಆಯ್ಕೆಗೆ ಕನಿಷ್ಠ 4ನೇ ತರಗತಿ ತೇರ್ಗಡೆ, ಗರಿಷ್ಠ 9ನೇ ತರಗತಿ ತೇರ್ಗಡೆ. ಇದರಲ್ಲಿ ಹೆಚ್ಚಿನ ವಿದ್ಯಾರ್ಹತೆಯುಳ್ಳವರನ್ನು ಆಯ್ಕೆ ಮಾಡಬೇಕು. |

| | | |
|---|---|---|
| ಇ. | ಈವರೆಗೆ ಯಾವ ಯಾವ ಹುದ್ದೆಗೆ ಎಷ್ಟು ಅಭ್ಯರ್ಥಿಗಳು ಅರ್ಜಿ ಸಲ್ಲಿಸಿರುತ್ತಾರೆ. ನೇಮಕಾತಿ ಪ್ರಕ್ರಿಯೆ ಯಾವ ಹಂತದಲ್ಲಿದೆ; ಸರ್ಕಾರ ಯಾವ ಕಾಲಮಿತಿಯಲ್ಲಿ ನೇಮಕಾತಿ ಪ್ರಕ್ರಿಯೆಯನ್ನು ಪೂರ್ಣಗೊಳಿಸಲಾಗುವುದು? (ವಿವರವನ್ನು ನೀಡುವುದು.) | ಈವರೆಗೆ ಅಂಗನವಾಡಿ ಕಾರ್ಯಕರ್ತೆಯರ ಹುದ್ದೆಗೆ 939 ಅರ್ಜಿಗಳು ಹಾಗೂ ಅಂಗನವಾಡಿ ಸಹಾಯಕಿಯರ ಹುದ್ದೆಗಳಿಗೆ 256 ಅರ್ಜಿಗಳು ಸ್ವೀಕೃತಗೊಂಡಿರುತ್ತದೆ. ಸದರಿ ಅರ್ಜಿಗಳ ಪರಿಶೀಲನೆಗಾಗಿ ಆಯ್ಕೆ ಸಮಿತಿಯ ಸಭೆ ಕರೆಯಲು ಮಾನ್ಯ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಆಯ್ಕೆ ಸಮಿತಿ ಬೆಂಗಳೂರು ನಗರ ಜಿಲ್ಲೆ ಇವರಿಗೆ ದಿನಾಂಕವನ್ನು ನಿಗದಿಪಡಿಸಲು ಕೋರಲಾಗಿರುತ್ತದೆ. ಆಯ್ಕೆ ಮಾರ್ಗಸೂಚಿಗಳಲ್ಲಿ ನಿಗದಿಪಡಿಸಿರುವ ಕಾಲಮಿತಿಯಂತೆ ಆಯ್ಕೆ ಪ್ರಕ್ರಿಯೆ ನಡೆಸಲಾಗುತ್ತದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 59 ಐಸಿಡಿ 2021